ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ತೋಟಗಾರಿಕೆ ಇಲಾಖೆಗೆ ಬಿಡುಗಡೆಯಾಗಿರುವ ಅನುದಾನದ ಬಗ್ಗೆ

ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

666 (802) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ವಿವಿಧ ಲೆಕ್ಕ ಶೀರ್ಷಿಗಳಡಿಯಲ್ಲಿ ಕೇಂದ್ರ ವಲಯ, ರಾಜ್ಯ ವಲಯ ಹಾಗೂ ಇತರೆ ವಲಯಗಳಡಿ ಹಲವು ಯೋಜನೆಗಳಿಗೆ ಕಳೆದ ಮೂರು ವರ್ಷಗಳಲ್ಲಿ ಮಂಜೂರಾದ ಅನುದಾನವೆಷ್ಟು; ಮಂಜೂರಾದ ಅನುದಾನದ ವಿವರವನ್ನು ಆರ್ಥಿಕ ಹಾಗೂ ಭೌತಿಕ ಪ್ರಗತಿ ಫಲಾನುಭವಿಗಳ ವಿವರಗಳೊಂದಿಗೆ ಯೋಜನೆವಾರು ಸಂಪೂರ್ಣ ವಿವರ ನೀಡುವುದು;

(ಆ) ಹಾಸನ ಜಿಲ್ಲೆಯ ತೋಟಗಾರಿಕಾ ಇಲಾಖಾ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ತೋಟಗಾರಿಕಾ ಕ್ಷೇತ್ರಗಳು /ನರ್ಸರಿಗಳು ಯಾವುವು; ಸದರಿ ಕ್ಷೇತ್ರಗಳ/ನರ್ಸರಿ ಅಭಿವೃದ್ಧಿ, ನಿರ್ವಹಣೆ ಹಾಗೂ ವಿವಿಧ ಕಾರ್ಯ ಚಟುವಟಿಕೆಗಳಿಗಾಗಿ ಕಳೆದ 3 ವರ್ಷಗಳಲ್ಲಿ ವಿವಿಧ ಲೆಕ್ಕಶೀರ್ಷಿಕೆಗಳಡಿಯಲ್ಲಿ ಬಿಡುಗಡೆಗೊಂಡ ಅನುದಾನವೆಷ್ಟು; (ಕ್ಷೇತ್ರವಾರು, ವಾರ್ಷಿಕವಾರು, ಲೆಕ್ಕ ಶೀರ್ಷಿಕೆವಾರು ಸಂಪೂರ್ಣ ವಿವರ ನೀಡುವುದು)

(ಇ) ಸದರಿ ತೋಟಗಾರಿಕಾ ಕ್ಷೇತ್ರಗಳಿಗೆ ಕಳೆದ 3 ವರ್ಷಗಳಲ್ಲಿ ಬಿಡುಗಡೆಗೊಂಡ ಅನುದಾನದಿಂದ ಕೈಗೊಂಡ ಕಾರ್ಯಕ್ರಮಗಳಾವುವು; ಸದರಿ ಕಾರ್ಯಕ್ರಮಗಳನ್ನು ಯಾವ ಏಜೆನ್ಸಿಯ ಮುಖಾಂತರ ಕೈಗೊಳ್ಳಲಾಗಿದೆ? (ವಿವರ ನೀಡುವುದು)